# ದೈತ್ಯ ಗೆಳೆಯನಾದಾಗ

**ಪೊಂಪಾ ಘೋಶಾಲ್**



'ದೈತ್ಯ' ಎಂಬ ಪದವನ್ನು ಅಜ್ಜಿ ಹೇಳುತ್ತಿದ್ದ ಕಥೆಗಳಲ್ಲಿ ಅಥವಾ ಕೆಲವು ಕಾಲ್ಪನಿಕ ಕಥೆಗಳಲ್ಲಿ ನಾವು ಕೇಳಿದ್ದೇವೆ. ಅದು ನಮ್ಮ ಮನಸ್ಸಿನಲ್ಲಿ ಭಯಾನಕ ಚಿತ್ರಣವನ್ನು ಮೂಡಿಸುತ್ತದೆ. ಈಗ ನಾನು ಹಂಚಿಕೊಳ್ಳಲು ಹೊರಟಿರುವ ಅನುಭವವೂ ಅಂತಹದ್ದೇ ಅನುಭವವನ್ನು ತರುತ್ತದೆ.

ಇದು ಒಂದು ಹೊಸ ಶಾಲೆಯಲ್ಲಿನ ನನ್ನ ಆರಂಭದ ದಿನಗಳ ಕಥೆ. ಜೊತೆಗೆ ಇಂಗ್ಲಿಷ್ ಅನ್ನು ಎರಡನೆಯ ಭಾಷೆಯಾಗಿ ಕಲಿಸುತ್ತಿದ್ದ ಶಾಲೆಯಲ್ಲಿ ಇಂಗ್ಲಿಷ್ ಸುಗಮದಾರಳಾಗಿಯೂ (facilitator) ನನ್ನ ಅನುಭವ ಹೊಸದು. ಆ ಶಾಲೆಯಲ್ಲಿ, ಅದರಲ್ಲೂ, ಉನ್ನತ-ಪ್ರಾಥಮಿಕ ತರಗತಿಗಳ ಪ್ರತಿಯೊಂದು ಮಗುವಿನ ಮನಸ್ಸಿನಲ್ಲಿಯೂ ಇಂಗ್ಲಿಷ್ ಒಂದು 'ದೈತ್ಯ'ನಾಗಿದ್ದನ್ನು ನಾನು ಕಂಡುಕೊಂಡೆ. ಏಕೆಂದರೆ, ಅವರಲ್ಲಿ ಯಾರೊಬ್ಬರೂ ತಮ್ಮ ಸುತ್ತಲಿನ ಅಥವಾ ತಮ್ಮದೇ ವಾತಾವರಣದ ಮೂಲಕ ಇಂಗ್ಲಿಷ್ ಭಾಷೆಯನ್ನು ಕೇಳುವ ಅವಕಾಶವನ್ನು ಹೊಂದಿರಲಿಲ್ಲ (ಯಾವುದೇ ಭಾಷೆಯನ್ನು ಕಲಿಯಲು ಆಲಿಸುವುವಿಕೆ ಮೊದಲ ಹೆಜ್ಜೆ ಎಂಬ ಅರ್ಥದಲ್ಲಿ). ಆದ್ದರಿಂದ ಒಂದು ಪಾಠದಲ್ಲಿ ಕಥೆಗಳು ಮತ್ತು ಲೇಖನಗಳಿದ್ದು, ಪ್ರತಿ ವಾಕ್ಯದಲ್ಲಿ ನಾಲ್ಕೈದು ಪದಗಳನ್ನು ಓದಲು ಮತ್ತು ಅರ್ಥಮಾಡಿಕೊಳ್ಳಲು ಮಗುವಿಗೆ ಸಾಧ್ಯವಾಗದಿದ್ದರೆ, ಆ ಪಾಠವನ್ನು ಅರ್ಥಮಾಡಿಕೊಳ್ಳುವುದು ನಿಜವಾಗಿಯೂ ಸವಾಲಾಗುತ್ತದೆ. ಹಾಗೂ ಮಕ್ಕಳು ಇಂಗ್ಲಿಷ್ ಅನ್ನು ಕಂಡರೆ ಹೆದರುವುದಕ್ಕೆ ಇದೂ ಒಂದು ಕಾರಣ ಎಂಬುದನ್ನು ನಾನು ಕಂಡುಕೊಂಡೆ.

ನನ್ನ ತರಗತಿಯಲ್ಲಿ ಅನೇಕ ಮಕ್ಕಳು ಮಂಕು ಕವಿದಂತೆ ಕುಳಿತುಕೊಳ್ಳುವುದನ್ನು ಗಮನಿಸುತ್ತಿದ್ದೆ: ಈ ಕಠಿಣ ವಿಷಯವನ್ನು ನಾನು ಏಕೆ ಅವರಿಗೆ ಕಲಿಸಲು ಬಯಸುತ್ತೇನೆ ಎಂದು ಅವರು ಕೇಳುತ್ತಿದ್ದರು.

ಅವರ ಈ ಗ್ರಹಿಕೆಯನ್ನು ಹೇಗೆ ಹೋಗಲಾಡಿಸುವುದು? ಮಕ್ಕಳಿಗೆ ಇಂಗ್ಲಿಷ್ ಭಾಷೆಯು ಹಿತಕರ ಎಂದು ಭಾವಿಸಲು ಅನುವು ಮಾಡಿಕೊಡದಿರುವ ಕಾರಣ ಇದನ್ನು ಸಾಧಿಸುವುದು ಒಂದು ಸವಾಲೇ ಆಗಿತ್ತು. ಹಾಗಾದರೆ ಈ ಸಮಸ್ಯೆಯನ್ನು ಹೇಗೆ ಬಗೆಹರಿಸುವುದು? ನನಗೆ ಇದು ಒಂದು ದೊಡ್ಡ ಪ್ರಶ್ನೆಯಾಗಿತ್ತು. ಆದರೂ ನಾನು ನನ್ನ ಕರ್ತವ್ಯವನ್ನು ಪ್ರಾರಂಭಿಸಿದೆ. ಅವರೊಂದಿಗೆ ಮಾತನಾಡುವ ಮೂಲಕ ಮತ್ತು ಕೆಲವು ಉದಾಹರಣೆಗಳನ್ನು ನೀಡುವ ಮೂಲಕ ಅವರನ್ನು ಪ್ರೇರೇಪಿಸಲು ಪ್ರಯತ್ನಿಸುತ್ತಿದ್ದೆ. ಆದರೂ ಸಹ ಮಕ್ಕಳು ಸ್ವಂತವಾಗಿ ಓದುವ ಮತ್ತು ಬರೆಯುವ ಕೆಲಸದಿಂದ ತಪ್ಪಿಸಿಕೊಳ್ಳಲು ಯತ್ನಿಸುವುದನ್ನು ಕಂಡೆ. ೭ನೇ ತರಗತಿಯಲ್ಲಿನ ಸುಮಾರು ೩೦ ಮಕ್ಕಳ ಪೈಕಿ ಕೇವಲ ಇಬ್ಬರು ಮಕ್ಕಳಿಗೆ ಮಾತ್ರ ಓದಲು ಬರುತ್ತಿತ್ತು. ಅದೂ ಸಹ ಕೊಂಚ ಹಿಂಜರಿಕೆಯಿಂದಲೇ. ಈ ಇಬ್ಬರನ್ನು ಉತ್ತೇಜಿಸುವ ಮೂಲಕ ಆ ಸಂಖ್ಯೆಯನ್ನು ಸುಮಾರು ಆರಕ್ಕೆ ಏರಿಸಿದೆ. ಅನಂತರ ಈ ಮಕ್ಕಳನ್ನು ಮಿಶ್ರ ಗುಂಪುಗಳಾಗಿ ರಚಿಸಿ ಪರಸ್ಪರ ಓದಲು ಸಹಾಯ ಮಾಡಲು ಅನುವಾಗುವಂತೆ ನೋಡಿಕೊಂಡಿದ್ದರ ಫಲವಾಗಿ, ನಿಧಾನವಾಗಿ ತರಗತಿಯ ಮೂರನೇ ಎರಡರಷ್ಟು ಭಾಗ ಮಕ್ಕಳು ಗಟ್ಟಿಯಾಗಿ ಓದಲು ಸಾಧ್ಯವಾಯಿತು. ಈಗ ಅವರಿಗೆ ಓದುವುದರಲ್ಲಿ ಸ್ವಲ್ಪ ಆತ್ಮವಿಶ್ವಾಸ ಮೂಡಿತು. ಅವರು ಮುಕ್ತವಾಗಿ ಓದುವುದನ್ನು ಕೇಳಿದಾಗ ನನಗೆ ಸಂತೋಷವಾಯಿತು.

ಬರೆಯುವುದು ಮತ್ತು ಮಾತನಾಡುವುದು ಇನ್ನೂ ಸವಾಲಾಗಿಯೇ ಉಳಿದಿತ್ತು. ಉತ್ತರಗಳನ್ನು ಹುಡುಕಲು ಸ್ವತಃ ಪ್ರಯತ್ನ ಮಾಡದೇ ಮಕ್ಕಳು ಯಾವಾಗಲೂ ಸಿದ್ಧ ಉತ್ತರಗಳಿಗಾಗಿ ನನ್ನ ಮೇಲೆಯೇ ಅವಲಂಬಿತರಾಗಿದ್ದರು. ತಾವಾಗಿಯೇ ಉತ್ತರಗಳನ್ನು ಬರೆಯಬಹುದು ಎಂಬ ಕಲ್ಪನೆಯೂ ಅವರಿಗೆ ಇರಲಿಲ್ಲ. ಅವರಲ್ಲಿ ಆ ಆತ್ಮವಿಶ್ವಾಸವನ್ನು ಮೂಡಿಸಲು ನಾನು ಹೆಣಗಾಡುತ್ತಿದ್ದೆ.

ಅದೃಷ್ಟವಶಾತ್ ನಾವು ಒಂದು ಮಾರ್ಗವನ್ನು ಕಂಡುಕೊಂಡೆವು. 'ಆಲಿಸ್ ಇನ್ ವಂಲ್ಯಾಂಡ್' ಎಂಬ ಪಾಠವನ್ನು ಕಲಿಸುವ ಸಮಯ ಬಂದಿತು. ಇದು ಮೂರು ಪುಸ್ತಕಗಳಲ್ಲಿ ಮೂರು ಭಾಗಗಳಲ್ಲಿ ನೀಡಲಾದ ಒಂದು ಬಹಳ ಆಸಕ್ತಿದಾಯಕ ಕಥೆ: ೬ನೇ ತರಗತಿಯಲ್ಲಿ ಮೊದಲನೆಯ ಭಾಗ, ೭ನೇ ತರಗತಿಯಲ್ಲಿ ಎರಡನೆಯದು ಮತ್ತು ೮ನೇ ತರಗತಿಯಲ್ಲಿ ಮೂರನೆಯ ಭಾಗವಿತ್ತು. ನಾನು ೭ನೇ ತರಗತಿಗೆ ಕಲಿಸುತ್ತಿದ್ದೆ. ಹಾಗಾಗಿ ಆರು ಮತ್ತು ಏಳನೇ ತರಗತಿಯ ಪುಸ್ತಕಗಳಲ್ಲಿನ ಕಥೆಯನ್ನು ಸಂಕ್ಷಿಪ್ತವಾಗಿ ಹೇಳುವ ಮೂಲಕ ಪಾಠವನ್ನು ಪ್ರಾರಂಭಿಸಿದೆ. ಆದರೆ ಕಥೆ ಅಪೂರ್ಣವಾಗಿತ್ತು. ನಮ್ಮ ಶಾಲೆಯಲ್ಲಿ ೮ನೇ ತರಗತಿ ಇಲ್ಲದ ಕಾರಣ ಮೂರನೇ ಭಾಗ ಲಭ್ಯವಿರಲಿಲ್ಲ. ನಮ್ಮ ಲೈಬ್ರರಿಯಲ್ಲಿ ಪುಸ್ತಕದ ಲಭ್ಯತೆ ಇದ್ದರೂ ಸಹ, ಆ ಪಾಠವು ಬಹಳ ಉದ್ದವಿದ್ದ ಕಾರಣ ಮಕ್ಕಳಿಗೆ ಓದಲು ಕಷ್ಟವಾಯಿತು. ಹಾಗಾಗಿ ಆರನೇ ತರಗತಿಗೆ ಪಾಠ ಮಾಡುತ್ತಿದ್ದ ನನ್ನ ಸಹೋದ್ಯೋಗಿ ಮತ್ತು ನಾನು ಅದರ ಒಂದು ಸಿನಿಮಾ ಪ್ರದರ್ಶನದ ಬಗ್ಗೆ ಯೋಚಿಸಿದೆವು. ನನ್ನ ಸಹೋದ್ಯೋಗಿ ನಾವು ಸಿನಿಮಾವನ್ನು ಹಿಂದಿ ಭಾಷೆಯಲ್ಲಿ ತೋರಿಸಬೇಕೇ ಎಂದು ಕೇಳಿದರು. ಆದರೆ ಇಂಗ್ಲಿಷ್ನಲ್ಲಿ ಸಿನಿಮಾವನ್ನು ನೋಡಿದರೆ, ಎಷ್ಟು ಸಾಧ್ಯವೋ ಅಷ್ಟು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಲು ಅವರಿಗೆ ಅದು ಒಂದು ಉತ್ತಮ ಅವಕಾಶವಾಗುತ್ತದೆ ಎಂದು ನಾನು ಭಾವಿಸಿದೆ. ಆಗ ನಮ್ಮ ಜಿಲ್ಲಾ ಶಿಕ್ಷಣ ಸಂಸ್ಥೆಯಲ್ಲಿ ಸಿನಿಮಾವನ್ನು ಇಂಗ್ಲಿಷ್ನಲ್ಲಿ ತೋರಿಸಲಾಯಿತು. ಮಕ್ಕಳು ಸಿನಿಮಾವನ್ನು ನೋಡಿ ಆನಂದಿಸಿದರು ಮತ್ತು ಆಲಿಸ್ ಕಥೆಯನ್ನು ಅರ್ಥಮಾಡಿಕೊಂಡರು. ಅವರು ಅದನ್ನು ತಮ್ಮ ಪಾಠದೊಂದಿಗೆ ಸಂಬಂಧ ಕಲ್ಪಿಸಿಕೊಳ್ಳಲು ಸಾಧ್ಯವಾಯಿತು. ಅವರ ಪುಸ್ತಕದ ಕಥೆ ಮತ್ತು ಸಿನಿಮಾದ ಕಥೆಯಲ್ಲಿನ ಅನೇಕ ವ್ಯತ್ಯಾಸಗಳನ್ನು ಗುರುತಿಸಿದರು. ನಿಧಾನವಾಗಿ ಅವರ ಒಲವು ಕಥೆಯ ಕಡೆಗೆ ಹೊರಳುತ್ತಿದ್ದಂತೆ, ಕಥೆಯನ್ನು ಮತ್ತು ಅದರ ಪಾತ್ರಗಳನ್ನು ಚರ್ಚಿಸಲು ಇಂಗ್ಲಿಷ್ ತರಗತಿಗೆ ಹಾಜರಾಗಲು ಪ್ರಾರಂಭಿಸಿದರು. ಅಲ್ಲಿಯವರೆಗೆ, ನಾವು ಕಥೆ

ಹೇಳುವುದು, ಓದುವುದು, ಕನಸಿನ ದೃಶ್ಯವನ್ನು ಚರ್ಚಿಸುವುದು ಎಂದು ಸುಮಾರು ಹತ್ತು ದಿನಗಳನ್ನು ಕಳೆದಿದ್ದೆವು. ಅದು ಅವರಿಗೆ 'ದೊಡ್ಡವಳಾ(ನಾ)ದಾಗ ನಾನು ಹೀಗೆ ಆಗಬೇಕೆಂಬ ಆಸೆ ಇದೆ' ಎಂಬ ಶೀರ್ಷಿಕೆಯುಳ್ಳ ವಿಷಯದ ಬಗ್ಗೆ ವೈಯಕ್ತಿಕ ಅಭಿಪ್ರಾಯಗಳನ್ನು ನೀಡುವಂತೆ ಮಾಡಿತು.

ಆ ಪಾಠವು ಒಂದು 'ಜಾದು'ವನ್ನೇ ಮಾಡಿಬಿಟ್ಟಿತೇನೋ ಎಂದು ನನಗೆ ಅನಿಸಿತು. ನನ್ನ ಮುಂದಿನ ಪಾಠಗಳನ್ನು ಅದು ಆಸಕ್ತಿದಾಯಕವಾಗಿಸಿತು. ಆದ್ದರಿಂದ ಇನ್ನೂ ಹಲವು ಚಟುವಟಿಕೆಗಳ ಮೂಲಕ ಕಲಿಸುತ್ತಾ ಮುಂದುವರಿಯಲು ನಾನು ನಿರ್ಧರಿಸಿದೆ. ಅವರು ಸಿನಿಮಾವನ್ನು ನೋಡಿದ ಆಧಾರದ ಮೇಲೆ ಅದೇ ಪಾತ್ರಗಳನ್ನು ಮತ್ತೆ ನಟಿಸುವಂತೆ ಹೇಳಿದೆ. "ಅದು ಹೇಗೆ ಸಾಧ್ಯ? ನಮಗೆ ಸಂಭಾಷಣೆಗಳು ನೆನಪಿಲ್ಲವಲ್ಲಾ?" ಎಂದು ಅವರು ಕೇಳಿದರು. "ಸ್ವತಃ ನಾವೇ ಸಂಭಾಷಣೆಯನ್ನು ಬರೆದು ನಾಟಕ ಮಾಡೋಣವೇ?" ಎಂದು ನಾನು ಕೇಳಿದೆ. "ಮಾಡಬಹುದು, ಆದರೆ ಹಿಂದಿಯಲ್ಲಿ" ಎಂದು ಅವರು ಹೇಳಿದರು. "ಆದರೆ ನನಗೆ ಇಂಗ್ಲಿಷ್‌ನಲ್ಲಿ ಮಾತ್ರ ಬೇಕು" ಎಂದು ನಾನು ಹೇಳಿದೆ. ಮೊದ ಮೊದಲು ಅದು ತುಂಬ ಕಷ್ಟವಾಗುತ್ತದೆ ಎಂದು ಅವರು ಹೇಳಿದರೂ ಸಹ, ಅನಂತರದಲ್ಲಿ ಸಂಭಾಷಣೆಗಳನ್ನು ನಾನೇ ಬರೆಯಬೇಕು ಎಂಬ ಷರತ್ತಿನ ಮೇಲೆ ಅವರು ಒಪ್ಪಿಕೊಂಡರು. ಅದಕ್ಕೆ ನಾನು, "ನಾನು ಸಂಭಾಷಣೆಗಳನ್ನು ಬರೆದರೆ, ನೀವು ಆ ಸಾಲುಗಳನ್ನು ಕಂಠಪಾಠ ಮಾಡಬೇಕು. ಅದು ಇನ್ನೂ ಕಷ್ಟಕರ ಕೆಲಸ. ಆದ್ದರಿಂದ ನಾವು ಒಟ್ಟಿಗೆ ಕಥಾವಸ್ತುವನ್ನು ಬರೆದರೆ ಅದು ಬಹಳ ಸುಲಭವಾಗುತ್ತದೆ" ಎಂದು ಹೇಳಿದೆ. ಅವರು ಒಪ್ಪಿದರು.

ನಾನು ಯೋಚಿಸಿದ್ದನ್ನು ಕಾರ್ಯಗತಗೊಳಿಸಲು ನನಗೀಗ ಅವಕಾಶ ಸಿಕ್ಕಂತಾಯಿತು. ಪಾತ್ರಾಭಿನಯಕ್ಕೆ ಕಥಾವಸ್ತುವನ್ನು ಬರೆಯಲು ಮಕ್ಕಳು ತುಂಬ ಉತ್ಸುಕರಾಗಿದ್ದರು. ಮೊದಲು ಅವರು ಪದಗಳನ್ನು ಅನುವಾದಿಸಿದರು. ಅವರ ಎಲ್ಲ ಸಲಹೆಗಳನ್ನು ನಾನು ಕಪ್ಪು ಹಲಗೆಯ ಮೇಲೆ ಬರೆದೆ. ಉದಾಹರಣೆಗೆ, ಅವರು ಕೋ, ಕ್ಯಾ, ಪಸಂದ್, ಪೂಚೇಗಿ, ತುಮ್ಹೆ, ಸಪ್ನೆ, ಇತ್ಯಾದಿ ಪದಗಳಿಗೆ ತತ್ಸಮಾನ ಇಂಗ್ಲಿಷ್ ಪದಗಳನ್ನು ಕಂಡುಕೊಂಡರು.

ಕಥಾವಸ್ತುವನ್ನು ಬರೆಯುವ ಚಟುವಟಿಕೆಯು ಇಂಗ್ಲಿಷ್ ಕಲಿಯಲು ಮಕ್ಕಳನ್ನು ಉತ್ಸುಕರನ್ನಾಗಿ ಮಾಡಿತು. ಅದನ್ನು ಬರೆಯುವಾಗ ಅವರು ಅನೇಕ ಹೊಸ ಪದಗಳನ್ನು, ವ್ಯಾಕರಣದ ಕೆಲವು ನಿಯಮಗಳನ್ನು ಕಲಿತರು. ಈ ಕಥಾವಸ್ತು ಬರೆಯುವ ಪ್ರಕ್ರಿಯೆಯು ಪೂರ್ಣಗೊಳ್ಳಲು ಸುಮಾರು ಹದಿನೈದು ದಿನಗಳನ್ನು ತೆಗೆದುಕೊಂಡಿತು. ಈ ಸಮಯದಲ್ಲಿ ಮಕ್ಕಳು ಇಂಗ್ಲಿಷ್ ತರಗತಿಗಾಗಿ ಕಾತರದಿಂದ ಕಾಯುತ್ತಿದ್ದರು. ಅವರು ಮುಂದಿನ ದೃಶ್ಯದೊಂದಿಗೆ ಸಿದ್ಧರಿರುತ್ತಿದ್ದರು. ಕಥಾವಸ್ತುವಿನಲ್ಲಿ ಬದಲಾವಣೆಗಳನ್ನು ಮಾಡಲು ತಮ್ಮ ಕಲ್ಪನಾಶಕ್ತಿಯನ್ನು ಬಳಸಿದರು.

ಕಥಾವಸ್ತು ಬರೆಯುವುದು ಮುಗಿದ ಅನಂತರ, ಮಕ್ಕಳು ಪಾತ್ರಾಭಿನಯದ ತಯಾರಿಯನ್ನು ಪ್ರಾರಂಭಿಸಿದರು. ಅರ್ಧದಷ್ಟು ಮಕ್ಕಳು ಅಭ್ಯಾಸ ಮಾಡುತ್ತಿದ್ದರೆ ಇನ್ನುಳಿದ ಮಕ್ಕಳು ನಾಟಕಕ್ಕೆ ಬೇಕಾದ ಪರಿಕರಗಳನ್ನು ಸಿದ್ಧಪಡಿಸುತ್ತಿದ್ದರು. ಅವರು ಚಾರ್ಟ್ ಪೇಪರ್ ಬಳಸಿ ಮರಗಳು, ಹುಲ್ಲು, ಕಿರೀಟಗಳು, ಕಾರ್ಡ್ಗಳನ್ನು ಮಾಡಿದರು. ಎಲ್ಲ ಮಕ್ಕಳೂ ಈ ನಾಟಕದ ಭಾಗವಾಗಿದ್ದರು. ಇಂತಹ ಸುಂದರ ಸಮೂಹ ಕೆಲಸವನ್ನು ನಾನು ನನ್ನ ಜೀವನದಲ್ಲಿ ನೋಡಿರಲಿಲ್ಲ. ಇದು ಒಂದು ಗುಂಪು ಕೆಲಸದಲ್ಲಿ ಇರಬಹುದಾದ ಅದ್ಭುತ ಸಮನ್ವಯದ ಉದಾಹರಣೆಯಾಗಿ ಇತ್ತು. ಈ ಸಿದ್ಧತೆ ಪೂರ್ಣಗೊಳ್ಳಲು ಹತ್ತು ದಿನಗಳನ್ನು ತೆಗೆದುಕೊಂಡಿತು.

ಕೊನೆಗೆ ಆ ಮಹತ್ತರ ದಿನ ಬಂದೇ ಬಿಟ್ಟಿತು. ಅಂದು ಶನಿವಾರ. ೭ನೇ ತರಗತಿಯ ಎಲ್ಲ ವಿದ್ಯಾರ್ಥಿಗಳು ಎಲ್ಲರ ಮುಂದೆ ನಾಟಕವನ್ನು ಪ್ರಸ್ತುತಪಡಿಸಲು ಸಿದ್ಧರಾಗಿದ್ದರು. ಇಡೀ ಶಾಲೆಯು ಅವರ ಪ್ರದರ್ಶನವನ್ನು ಆನಂದಿಸಿತು ಮತ್ತು ಮಕ್ಕಳು ಹೆಚ್ಚಿನ ಮೆಚ್ಚುಗೆಯನ್ನು ಪಡೆದರು. ಇದು ಅವರ ಆತ್ಮ ವಿಶ್ವಾಸವನ್ನು ಹೆಚ್ಚಿಸಿತು.

ನಿರ್ದಿಷ್ಟವಾಗಿ ಈ ಚಟುವಟಿಕೆಯು ಮಕ್ಕಳ ಶಬ್ದಕೋಶ, ವಾಕ್ಯ ರಚನೆ, ಆಲೋಚನೆ, ಮಾತನಾಡುವ ಮತ್ತು ಆಲಿಸುವ ಕೌಶಲ್ಯಗಳನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾ ಅವರ ಓದುವ ಮತ್ತು ಬರೆಯುವ ಕಲ್ಪನೆಯನ್ನು ಸುಧಾರಿಸಿತು. ಆ ತರುವಾಯ, ಮಕ್ಕಳು ಇತರ ವಿಷಯಗಳಿಗೆ ಹಾಜರಾಗುತ್ತಿದ್ದಂತೆಯೇ ಇಂಗ್ಲಿಷ್ ತರಗತಿಗಳಿಗೂ ಹಾಜರಾದರು. ಇಂಗ್ಲಿಷ್ ವಿಷಯವನ್ನು ಅರ್ಥಮಾಡಿಕೊಳ್ಳಲು ಮತ್ತು ಅದರ ಬಗ್ಗೆ ಆಳವಾಗಿ ತಿಳಿದುಕೊಳ್ಳಲು ತಮ್ಮ ಮನಸ್ಸನ್ನು ತೆರೆದಿಟ್ಟುಕೊಳ್ಳುವ ಪ್ರಯತ್ನ ಮಾಡಿದರು. ಈಗ ಅವರು ಸ್ವತಃ ಓದಲು ಮತ್ತು ಬರೆಯಲು ಪ್ರಯತ್ನಿಸುತ್ತಾರೆ. ಜೊತೆಗೆ ಒಂದು ಹೆಜ್ಜೆ ಮುಂದೆ ಹೋಗಿ ಗ್ರಹಿಕೆಯ ಕೌಶಲ್ಯದ ಭಾಗವನ್ನು ಸ್ವತಃ ಬಗೆಹರಿಸುತ್ತಾರೆ. ಈಗ ಆ 'ದೈತ್ಯ'– ಅವರು ಮಾತನಾಡಲು, ಆನಂದಿಸಲು ಮತ್ತು ಆಟವಾಡಲು ಇಷ್ಟಪಡುವ ಅವರ ಸ್ನೇಹಿತನಾದಂತೆ ತೋರುತ್ತದೆ.

ಈ ಪ್ರಕ್ರಿಯೆಯಲ್ಲಿ ನಾನು ಸಹ ಕೆಲವು ವಿಷಯಗಳನ್ನು ಕಲಿತಿದ್ದೇನೆ: ಯಾವುದೇ ಭಾಷೆಯನ್ನು ಕಲಿಯುವುದರಿಂದ ನಮ್ಮನ್ನು ಹಿಂದಕ್ಕೆ ಎಳೆಯುವ ಪ್ರಮುಖ ವಿಷಯವೆಂದರೆ ಭಯ ಎಂದು ನಾನು ಕಂಡುಕೊಂಡೆ. ವಿದೇಶಿ ಭಾಷೆಯಾದ ಇಂಗ್ಲಿಷ್ ನಮ್ಮ ಮನಸ್ಸುಗಳಲ್ಲಿ ದೈತ್ಯನಾಗಿ ಮಾರ್ಪಟ್ಟಿದೆ. ಮೊದಲು ನಾವು ಅದರೊಂದಿಗೆ ಸ್ನೇಹಪರರಾಗಿರಬೇಕು. ಅನಂತರ ನಾವು ಮಾತನಾಡಿದಾಗ ಕೆಲವು ವ್ಯಾಕರಣ ದೋಷಗಳಿದ್ದರೂ, ಇತರರ ಪ್ರತಿಕ್ರಿಯೆಗಳಿಗೆ ಹೆಚ್ಚು ಗಮನಕೊಡದೆ ಆ ವಾತಾವರಣದಲ್ಲಿ ಆರಾಮವಾಗಿ ಇರಲು ಯತ್ನಿಸಬೇಕು. ಆಗ ಮಾತ್ರ ಈ 'ದೈತ್ಯ' ನನ್ನು ಓಡಿಸಲು ಸಾಧ್ಯವಾಗುತ್ತದೆ.

---

**ಪೊಂಪಾ** ಅವರು ಏಪ್ರಿಲ್ ೨೦೧೬ ರಿಂದ ಅಜೀಮ್ ಪ್ರೇಮ್ ಜಿ ಶಾಲೆ, ಧಮ್ತಾರಿಯಲ್ಲಿ ಬೋಧಿಸುತ್ತಿದ್ದಾರೆ. ಅವರು ಗಣಿತದಲ್ಲಿ ಪದವಿ ಪಡೆದು, ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದು, ರಾಯಪುರದ ರವಿಶಂಕರ್ ವಿಶ್ವವಿದ್ಯಾಲಯದಿಂದ ಬಿಎಡ್ ಅನ್ನು ಪೂರ್ಣಗೊಳಿಸಿದ್ದಾರೆ. ೧೯೯೭ರಲ್ಲಿ ಖಾಸಗಿ ಶಾಲೆಯಲ್ಲಿ ತಮ್ಮ ಶಿಕ್ಷಕ ವೃತ್ತಿಯನ್ನು ಪ್ರಾರಂಭಿಸಿದ ಅವರು ಅನೇಕ ಶಾಲೆಗಳಲ್ಲಿ ಗಣಿತ, ವಿಜ್ಞಾನ, ಮತ್ತು ಇಂಗ್ಲಿಷ್ ಶಿಕ್ಷಕರಾಗಿ ಕೆಲಸ ನಿರ್ವಹಿಸಿದ್ದಾರೆ. ಅವರು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಆಸಕ್ತಿ ಹೊಂದಿದ್ದಾರೆ. ಅವರನ್ನು pompa.ghoshal@azimpremjifoundation.org ಇಲ್ಲಿ ಸಂಪರ್ಕಿಸಬಹುದು.